### ವಿಶೇಷವಿಷಯ

ಮು ಖ್ಯಾ ಭಿ ಪ್ರಾ ಯ ವು—ಎಲೈ ಅಶ್ವಿನೀದೇವತೆಗಳೇ, ನೀವು ಎಲ್ಲ ಕಡೆಯಲ್ಲಿಯೂ ಸಂಚರಿಸುವ ಸಾಮರ್ಥ್ಯವುಳ್ಳವರು. ಉಷಃಕಾಲಕ್ಕೆ ಮುಂಚಿತವಾಗಿಯೇ ನಿಮ್ಮ ಆಗಮನವು. ನೀವು ಬಂದನಂತರ ನಿಮ್ಮನ್ನನು ಸರಿಸಿಯೇ ಉಷೋದೇವತೆಯು ಬರುವಳು. ನೀವು ಬಂದಮೇಲೆ ಉಷಃಕಾಲವು ಪ್ರಾಪ್ತವಾಗುವುದು. ನೀವು ಬರುವಾಗ ಇನ್ನೂ ಉಷಃಕಾಲವಾಗದೆ ಕತ್ತಲೆಯಿಂದ ಕೂಡಿದ ರಾತ್ರಿಯೇ ಇರುವುದರಿಂದ ಅಂತಹ ರಾತ್ರಿಕಾಲ ಗಳಲ್ಲಿ ಅರ್ಪಿಸುವ ಹವಿಸ್ಸುಗಳನ್ನು ನೀವು ಸ್ವೀಕರಿಸಿ ತೃಪ್ತಿಯನ್ನು ಹೊಂದುವಿರಿ.

**ಪರಿಜ್ಮಾನೋಃ— ಪರಿತೋ ಅಜತೋ ಗಚ್ಛತ ಇತಿ ಪರಿಜ್ಮಾನೌ ।** ಸುತ್ತಲೂ ಎಂದರೆ ಎಲ್ಲಾ ಕಡೆಯಲ್ಲಿಯೂ ಹೋಗುವವರಾದ.

**ಋತಾ— ಯಜ್ಞಗತಾನಿ ಹವೀಂಷಿ ।** ಯಜ್ಞದಲ್ಲಿ ಸಮರ್ಪಿಸುವ ಹವಿಸ್ಸುಗಳನ್ನು

**ವನಥಃ—ವನ ಷಣ ಸಂಭಕ್ತೌ ।** ಹೊಂದುವಿರಿ, ಹೊಂದಲಿಚ್ಛಿಸುವಿರಿ.

**ಅಕ್ತುಭಿಃ—** ರಾತ್ರಿಕಾಲಗಳಲ್ಲಿ. ಅಕ್ತುಭೀ ರಾತ್ರಿಭಿಃ ಎಂದು ನಿರುಕ್ತವಚನವಿರುವುದು. (ನಿ. ೧೨-೨೩)

### ವ್ಯಾಕರಣಪ್ರಕ್ರಿಯಾ

**ಯುವೋಃ—**ಯುಷ್ಮದ್ ಶಬ್ದದ ಮುಂದೆ ಷಷ್ಠೀ ದ್ವಿವಚನ ಓಸ್. ' ಸುಪಾಂ ಸುಪೋ ಭವನ್ತಿ ' ಎಂದು ಓಸ್‌ಗೆ ಓಸ್ ಬರುತ್ತೆ. ಆದ್ದರಿಂದ **ಯೋಽಚಿ** (ಪಾ. ಸೂ. ೭-೨-೮೯) ಆದೇಶವನ್ನು ಹೊಂದದ ಅಜಾದಿ ವಿಭಕ್ತಿ ಪರದಲ್ಲಿದ್ದರೆ ಯುಷ್ಮದ್ ಅಸ್ಮದ್ ಶಬ್ದಗಳ ಕೊನೆಯ ವರ್ಣಕ್ಕೆ ಯಕಾರ ಬರುತ್ತೆ ಎಂದು ಯಕಾರ ಬರುವುದಿಲ್ಲ. **ಶೇಷೇ ಲೋಪಃ** (ಪಾ. ಸೂ. ೭-೨-೯೦) ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಮಪರ್ಯಂತಕ್ಕಿಂತಲೂ ಶಿಷ್ಟವಾದುದಕ್ಕೆ ಲೋಪ ಬರುತ್ತೆ ಎಂದು ಅದ್‌ಗೆ ಲೋಪ. ಯುವೋಸ್. ರುತ್ವವಿಸರ್ಗಗಳು. ಉದಾತ್ತ ನಿವೃತ್ತಿ ಸ್ವರದಿಂದ ವಿಭಕ್ತಿಯು ಉದಾತ್ತವಾಗುತ್ತೆ. **ಶೇಷೇ ಲೋಪಃ** ಎಂಬುದಕ್ಕೆ. ಆತ್ವಯತ್ವ ನಿಮಿತ್ತೇತರವಾದ ವಿಭಕ್ತಿ ಪರದಲ್ಲಿರುವಾಗ ಯುಷ್ಮದಸ್ಮಚ್ಛಬ್ದಗಳ ಕೊನೆಯ ವರ್ಣಕ್ಕೆ ಲೋಪ ಬರುತ್ತೆ. ಯುವ+ಓಸ್. **ಓಸಿಚ** ಎಂಬುದರಿಂದ ಏತ್ವವು ಛಾಂದಸವಾಗಿ ಬರುವುದಿಲ್ಲ. **ಅತೋ ಗುಣೇ** ಎಂದು ಪರರೂಪ. ಏಕಾದೇಶಸ್ವರ.

**ಪರಿಜ್ಮನೋಃ—ಶ್ವನ್ನುಕ್ಷನ್ಪೂಷನ್ಪ್ಲೀಹನ್‌ಕ್ಲೇದನ್ ಸ್ನೇಹನ್ ಮೂರ್ಧನ್‌ಮಜ್ಜನ್ನರ್ಯಮನ್ ವಿಶ್ವಪನ್ ಪರಿಜ್ಮನ್ ಮಾತರಿಶ್ವನ್ ಮಘವನ್ನಿತಿ** (ಉ. ಸೂ ೧-೧೫೭) ಎಂಬುದರಿಂದ ಅಜ ಧಾತು ಮುಂದೆ ಮನಿನ್ ಪ್ರತ್ಯಯ. ಅಕಾರಕ್ಕೆ ಛಾಂದಸವಾಗಿ ಲೋಪ.

**ಋತಾ—ಶೇಶ್ಛಂದಸಿ ಬಹುಲಂ** ಎಂದು ಶಿಗೆ ಲೋಪ ಬರುತ್ತದೆ.

**ವನಥಃ—**ವನ ಷಣ ಸಂಭಕ್ತೌ ಎಂದು ಪಠಿಸಿರುವ ವನಧಾತುಮುಂದೆ ಲಟ್ ಮಧ್ಯಮಪುರುಷ ದ್ವಿವಚನ ಥಸ್, ಶಪ್, ರುತ್ವ, ವಿಸರ್ಗ, **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತದೆ. ॥ ೧೪ ॥

ಸಂಹಿತಾಪಾಠಃ ॥

ಉಭಾ ಪಿಬತಮಶ್ವಿನೋಭಾ ನಃ ಶರ್ಮ ಯಚ್ಛತಂ ।
ಅವಿದ್ರಿಯಾಭಿರೂತಿಭಿಃ ॥ ೧೫ ॥

॥ ಪದಪಾಠಃ ॥

ಉಭಾ । ಪಿಬತಂ । ಅಶ್ವಿನಾ । ಉಭಾ । ನಃ । ಶರ್ಮ । ಯಚ್ಛತಂ ।
ಅವಿದ್ರಿಯಾಭಿಃ । ಊತಿಽಭಿಃ ॥ ೧೫ ॥

॥ ಸಾಯಣಭಾಷ್ಯಂ ॥

ಪ್ರವರ್ಗ್ಯೇ ಪೌರ್ವಾಹ್ಣಿಕೇ ಘರ್ಮಸ್ಯ ಹವಿಷೋ ದ್ವಿತೀಯಾ ಯಾಜ್ಯೋಭಾ ಪಿಬತಮಿತ್ಯೇಷಾ । ಅಥೋತ್ತರಮಿತಿ ಖಂಡೇ ಸೂತ್ರಿತಂ । ಉಭಾ ಪಿಬತಮಶ್ವಿನೇತಿ ಚೋಭಾಭ್ಯಾಮನವಾನಂ । ಆ. ೪-೭ । ಇತಿ ॥ ಆಶ್ವಿನಶಸ್ತ್ರೇಽಪ್ಯೇಷಾ ದ್ವಿತೀಯಾ ಯಾಜ್ಯಾ । ಸೂತ್ರಿತಂ ಚ । ಪ್ರ ವಾಮಂಧಾಂಸಿ ಮದ್ಯಾನ್ಯಸ್ಥುರುಭಾ ಪಿಬತಮಶ್ವಿನೇತಿ ಯಾಜ್ಯೇ । ಆ. ೬-೫ । ಇತಿ ॥

ಹೇ ಅಶ್ವಿನಾ ಉಭಾ ಯುವಾಮುಭೌ ಪಿಬತಂ । ಸೋಮಪಾನಂ ಕುರುತಂ । ತತ ಊರ್ಧ್ವಮುಭಾ ಯುವಾಮುಭಾವವಿದ್ರಿಯಾಭಿಃ ಪ್ರಶಸ್ತಾಭಿರೂತಿಭೀ ರಕ್ಷಾಭಿರ್ನೋಽಸ್ಮಭ್ಯಂ ಶರ್ಮ ಸುಖಂ ಯಚ್ಛತಂ ॥ ಪಿಬತಂ । ಪಾ ಪಾನೇ । ಲೋಟಿ ಶಪಿ ಪಾಘ್ರೇತ್ಯಾದಿನಾ ಪಿಬಾದೇಶಃ । ಅಂಗವೃತ್ತೇ ಪುನರ್ವೃತ್ತಾವವಿಧಿರ್ನಿಷ್ಠಿತಸ್ಯೇತಿ । ಮ. ೭-೩-೭೮-೨ । ಪರಿ. ೯೨ । ವಚನಾಲ್ಲಘೂಪಧಗುಣಾಭಾವಃ । ಯದ್ವಾ । ಆದ್ಯುದಾತ್ತೋಽದಂತಃ ಪಿಬಾದೇಶಃ । ತಿಜ್ಞತಿಙ ಇತಿ ನಿಘಾತಃ । ಯಚ್ಛತಂ । ದಾಣ್ ದಾನೇ । ಲೋಟಿ ಶಪಿ ಪಾಘ್ರೇತ್ಯಾದಿನಾ ಯಚ್ಛಾದೇಶಃ । ಅವಿದ್ರಿಯಾಭಿಃ । ದ್ರಾ ಕುತ್ಸಾಯಾಂ ಗತೌ । ವಿಪೂರ್ವಾದಸ್ಮಾದ್ಧಾವ ಔಣಾದಿಕಃ ಕಿಃ । ಆತೋ ಲೋಪ ಇಟಿ ಚೇತ್ಯಾಕಾರಲೋಪಃ । ವಿದ್ರಿರ್ನಿಂದಾ । ತದ್ವಿರೋಧಿನ್ಯವಿದ್ರಿಃ ಸ್ತುತಿಃ । ತಾಂ ಯಾಂತೀತ್ಯವಿದ್ರಿಯಾಃ । ಅನ್ಯೇಭ್ಯೋಽಪಿ ದೃಶ್ಯಂತ ಇತಿ ವಿಚ್ । ಕೃದುತ್ತರಪದಪ್ರಕೃತಿಸ್ವರತ್ವಂ । ಊತಿಭಿಃ । ಅವತೇಃ ಕ್ತಿನಿ ಜ್ವರತ್ವರೇತ್ಯಾದಿನೋಟ್ । ಊತಿಯೂತೀತ್ಯಾದಿನಾ ಕ್ತಿನ ಉದಾತ್ತತ್ವಂ ॥ ೩೫ ॥

ಪ್ರತಿಪದಾರ್ಥ

ಅಶ್ವಿನಾ— ಎಲೈ ಅಶ್ವಿನೀದೇವತೆಗಳೇ । ಉಭಾ— ನೀವಿಬ್ಬರೂ । ಪಿಬತಂ—ಸೋಮರಸಪಾನವನ್ನು ಮಾಡಿ (ಅನಂತರ) । ಉಭಾ— ನೀವಿಬ್ಬರೂ । ಅವಿದ್ರಿಯಾಭಿಃ— ನಿಂದಾತೀತಗಳಾಗಿರುವ (ಆದ್ದರಿಂದ

ಪ್ರಶಸ್ಯಗಳಾಗಿರುವ) । **ಊತಿಭಿಃ**— ನಿಮ್ಮ ರಕ್ಷಣೆಗಳಿಂದ । **ನಃ**— ನಮಗೆ । **ಶರ್ಮ**—ಸುಖವನ್ನು । **ಯಚ್ಛತಂ**— ಕೊಡಿರಿ.

॥ ಭಾವಾರ್ಥ ॥

ಎಲೈ ಅಶ್ವಿನೀದೇವತೆಗಳೇ, ನೀವಿಬ್ಬರೂ ದಯಮಾಡಿ ಸೋಮರಸಪಾನವನ್ನು ಮಾಡಿರಿ. ಅನಂತರ ನೀವಿಬ್ಬರೂ ದೋಷರಹಿತವಾಗಿಯೂ ಆದುದರಿಂದಲೇ ಪ್ರಶಸ್ಯವಾಗಿಯೂ ಇರುವ ನಿಮ್ಮ ರಕ್ಷಣೆಗಳಿಂದ ನಮಗೆ ಸುಖವನ್ನು ಕೊಡಿರಿ. (ಸುಖವನ್ನುಂಟುಮಾಡಿ)

## English Translation

O Aswins, drink you both ( the soma libation ) and bestow upon us happiness through your blameless protection

॥ ವಿಶೇಷವಿಷಯಗಳು ॥

ಪ್ರವರ್ಗ್ಯವೆಂಬ ಯಾಗದಲ್ಲಿ ಪೂರ್ವಾಹ್ಣಕಾಲದಲ್ಲಿ ಘರ್ಮವೆಂಬ ಹವಿಸ್ಸನ್ನು ಹೋಮಮಾಡುವಾಗ ಉಭಾ ಪಿಬತಂ ಎಂಬ ಈ ಋಕ್ಕನ್ನು ಎರಡನೆಯ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರಗ ಅಥೋತ್ತರಂ ಎಂಬ ಖಂಡದಲ್ಲಿ **ಉಭಾಪಿಬತಮಶ್ವಿನೇತಿ ಚೋಭಾಭ್ಯಾಮನವಾನಂ** ಎಂಬ ಸೂತ್ರದಿಂದ ವಿವೃತವಾಗಿರುವುದು. (ಆ. ೪-೭) ಮತ್ತು ಆಶ್ವಿನಶಸ್ತ್ರಮಂತ್ರಪಠನಕಾಲದಲ್ಲಿಯೂ ಈ ಋಕ್ಕನ್ನು ಎರಡನೆಯ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದಲ್ಲಿಯೇ **ಪ್ರ ವಾಮಂಧಾಂಸಿ ಮದ್ಯಾನ್ಯಸ್ಥು** ( ಋ. ಸಂ. ೭-೬೮-೨ ) **ರುಭಾ ಪಿಬತಮಶ್ವಿನೇತಿ ಯಾಜ್ಯೇ** ( ಋ. ಸ. ೧-೪೬-೧೫ ) ಎಂಬ ಸೂತ್ರನಲ್ಲಿ ಹೇಳಿರುವುದು

**ಅವಿದ್ರಿಯೋಭಿಃ ಊತಿಭಿಃ**— **ದ್ರಾ ಕುತ್ಸಾಯೋಂ ಗತೌ** । ವಿದ್ರಿರ್ನಿಂದಾ । **ತದ್ವಿರೋಧಿನ್ಯವಿದ್ರಿಃ ಸ್ತುತಿಃ । ತಾಂ ಯೋಂತೀತ್ಯವಿದ್ರಿಯಾಃ ತಾಭಿಃ** । ವಿಪೂರ್ವಕದ್ರಾಧಾತುವಿಗೆ ನಿಂದನೆಮಾಡುವುದು ಎಂದರ್ಥವು. ವಿದ್ರಿ ಎಂದರೆ ನಿಂದೆಯು. ಅವಿದ್ರಿಯೆಂದರೆ ನಿಂದೆಯಲ್ಲದ್ದು, ಸ್ತುತಿಯೆಂದರ್ಥವು. ಅವಿದ್ರಿಯಾಭಿಃ ಎಂದರೆ ಸ್ತುತಿರೂಪವಾದ ಅಥವಾ ಪ್ರಶಸ್ಯವಾದ, ಉತ್ತಮವಾದ ರಕ್ಷಣೆಗಳಿಂದ ಎಂದಭಿಪ್ರಾಯವು

ವ್ಯಾಕರಣಪ್ರಕ್ರಿಯಾ

**ಪಿಬತಮ್**—ಪಾ ಪಾನೇ, ಲೋಟ್-ಥಗೆ ತಮ್ ಆದೇಶ. ಶಪ್, **ಪಾಘ್ರಾಧ್ಮಾ—**, ಎಂದು ಪಾಗೆ ಪಿಬ್ ಆದೇಶ. ಪಿಬ್+ಅ+ತಮ್. ಈಗ ಶಪ್ಪನ್ನು ನಿಮಿತ್ತಮಾಡಿಕೊಂಡು **ಪುಗಂತ ಲಘೂಪಧಸ್ಯ ಚ** ಎಂದು ಲಘೂಪಧಗುಣವು ಪ್ರಾಪ್ತವಾಗುತ್ತೆ. ಆದರೂ, **ಅಂಗವೃತ್ತೇ ಪುನರ್ವೃತ್ತಾವವಿಧಿರ್ನಿಷ್ಠಿತಸ್ಯ** ( ಪಾ. ಸೂ. ೭-೩-೭೮—ಪರಿಭಾ ೯೨ ) ಅಂಗಾಧಿಕಾರದಲ್ಲಿರುವ ಒಂದು ಶಾಸ್ತ್ರವು ಬಂದು ರೂಪವು ಪರಿನಿಷ್ಠಿತವಾದರೆ ಮತ್ತೊಂದು

ಅಂಗಾಧಿಕಾರದಲ್ಲಿರುವ ಶಾಸ್ತ್ರ ಬರುವುದಿಲ್ಲ ಎಂಬುದರಿಂದ, ಅಂಗಾಧಿಕಾರಕ್ಕೆ ಸೇರಿದ ಪಿಬ್ ಆದೇಶ ಬಂದಮೇಲೆ ರೂಪವು ಪರಿನಿಷ್ಠಿತವಾಗುವುದರಿಂದ ಪುನಃ ಅಂಗಾಧಿಕಾರಕ್ಕೆ ಸೇರಿದ **ಪುಗಂತಲಘೂಪಧಸ್ಯ ಚ** ಎಂಬುದು ಬರುವುದಿಲ್ಲ. ಅಥವಾ ಪಿಬ ಎಂಬುದು ಅಕಾರಾಂತವಾದ ಆದೇಶ. ಇದು ಆದ್ಯುದಾತ್ತವಾಗಿ ಸೂತ್ರದಲ್ಲಿ ನಿಪಾತಿಸಲ್ಪಡುತ್ತೆ. ಪಿಬ+ಅ+ತನ್ ಈಗ ಲಘೂಪಧವಲ್ಲದುದರಿಂದ ಲಘೂಪಧಗುಣ ಬರುವುದಿಲ್ಲ. **ಅತೋ ಗುಣೇ** ಎಂದು ಪರರೂಪ ಬಂದು ಪಿಬತನ್ ಎಂದು ಆಗುತ್ತದೆ. **ತಿಙ್ಙತಿಙಃ** ಎಂದು ಸರ್ವಾನುದಾತ್ತ ಬರುತ್ತೆ.

**ಯಚ್ಛತನ್**— ದಾಣ್ ದಾನೇ, ಲೋಟ್ ಥಸ್‌ಗೆ ತನ್ ಆದೇಶ. ಶಪ್, **ಪಾಘ್ರಾಧ್ಮಾ** ಎಂದು ದಾಣ್‌ಗೆ ಯಚ್ಛ ಆದೇಶ.

**ಅನಿದ್ರಿಯಾಭಿಃ**— ದ್ರಾ ಕುತ್ಸಾಯಾಂ ಗತೌ. ವಿ ಉಪಸರ್ಗಪೂರ್ವಕವಾದ ಈ ಧಾತು ಮುಂದೆ ಭಾವಾರ್ಥದಲ್ಲಿ ಕಿ ಎಂಬ ಉಣಾದಿಯಾದ ಪ್ರತ್ಯಯ ಬರುತ್ತೆ. ವಿದ್ರಾ+ಇ. **ಆತೋ ಲೋಪ ಇಟಿಚ** ಎಂದು ಆಕಾರಕ್ಕೆ ಲೋಪ. ವಿದ್ರಿಃ–ನಿಂದೆ ಎಂದರ್ಥ. ನ ವಿದ್ರಿಃ ಅನಿದ್ರಿಃ ನಿಂದಾವಿರೋಧಿಯಾದ ಸ್ತುತಿ ಎಂದರ್ಥ. ವಿದ್ರಿಂ ಯಾಂತೀತಿ ವಿದ್ರಿಯಾಃ, ಸ್ತೋತ್ರವನ್ನು ಹೊಂದತಕ್ಕವು ಎಂದರೆ ಪ್ರಶಸ್ತವಾದವು ಎಂದು ಅರ್ಥ. ಯಾ ಪ್ರಾಪಣೇ **ಅನ್ಯೇಭ್ಯೋಽಪಿ ದೃಶ್ಯಂತೇ** ಎಂಬುದರಿಂದ ವಿಚ್ ಪ್ರತ್ಯಯ. **ಗತಿಕಾರಕೋಪಪದಾತ್ಕೃತ್** ಎಂದು ಕೃದಂತವಾದ ಉತ್ತರಪದಕ್ಕೆ ಪ್ರಕೃತಿಸ್ವರ ಬರುತ್ತೆ.

**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**

**ಇತಿ ಶ್ರೀಮದ್ರಾಜಾಧಿರಾಜಪರಮೇಶ್ವರವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಪ್ರಥಮಾಷ್ಟಕೇ**
**ತೃತೀಯೋಽಧ್ಯಾಯಃ ಸಮಾಪ್ತಃ.**

। ಓಂ ತತ್ಸತ್

ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಪ್ರಥಮಾಷ್ಟಕದಲ್ಲಿ
ಮೂರನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥

॥ ಶುಭಂ ಭೂಯಾತ್ ॥

॥ ಮಂಗಳಂ ॥